# ಬೃಂದಾವನ

ರಾ. ಮಧ್ವರಾಜ್

'ಬೃಂದಾವನ' ಈ ಪದ ಕೇಳಿದೊಡನೆಯೇ ನಮಗೆ ಗೋಚರವಾಗುವುದು ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳವರ 'ಬೃಂದಾವನ' ಅಥವಾ ಶ್ರೀ ಕೃಷ್ಣ ತನ್ನ ಬಾಲ್ಯವನ್ನು ಕಳೆದ 'ಬೃಂದಾವನ' ವಿವರಣಾತ್ಮಕವಾಗಿ ವಿಶ್ಲೇಷಿಸಿದಾಗ ಬೃಂದಾವನ ಎಂದರೆ ರಾಕ್ಷಸ ಕಾಲನೇಮಿಯ ಮಗಳೂ ಜಲಂಧರನ ಪತ್ನಿಯೂ ಆದ ವೃಂದೆಯ 'ವನ' ಎಂಬ ಅರ್ಥವೂ ಆಗುತ್ತದೆ. ಹಾಗೆಯೇ 'ಬೃಂದಾವನ'ವು 'ವೃಂದಾವನ'ದ ಇನ್ನೊಂದು ಹೆಸರು. ಭಕ್ತವೃಂದವು ಆಸರೆಗಾಗಿ ಬರುವ ಸ್ಥಳ 'ವೃಂದಾವನ' ಎಂಬ ವಿವರಣೆಯೂ ಇದೆ. ಪ್ರತಿ ನಿತ್ಯ ಹಿಂದೂ ಸುಮಂಗಲಿಯರು ಪೂಜಿಸುವುದು 'ತುಳಸಿ ಬೃಂದಾವನ'. ಹೇಗೆ 'ಬೃಂದಾವನ' ಎಂಬ ಪದಕ್ಕೆ ಅನೇಕ ಅರ್ಥಗಳಿವೆ.

ಬೃಂದಾವನ (ಉತ್ತರ ಭಾರತದಲ್ಲಿ ಬೃಂದಾಬನ್') ಎಂಬುದು ಒಂದು ಸ್ಥಳ. ಇಲ್ಲಿ ಭಗವಾನ್ ಶ್ರೀಕೃಷ್ಣನು ತನ್ನ ಬಾಲ್ಯದಲ್ಲಿ ಗೋಪಿಯರೊಡನೆಯೂ, ಯಶೋಧೆಯೊಡನೆಯೂ ವಾಸಿಸುತ್ತಿದ್ದ ಸ್ಥಳ, ಎಂಬ ಕಾರಣದಿಂದ ಒಂದು ಪವಿತ್ರ ಸ್ಥಳ ಎನಿಸಿದೆ.

ಶ್ರೀ ಮಧ್ವಾಚಾರ್ಯರ ನಂತರ ಬಂದ ಶ್ರೀ ಪದ್ಮನಾಭತೀರ್ಥರ "ಬೃಂದಾವನ"ವು ನಮಗೆ ತಿಳಿದಿರುವ ಪ್ರಥಮ 'ಬೃಂದಾವನ' ಅಂದರೆ ಸುಮಾರು ೭೦೦ ವರ್ಷಗಳಷ್ಟು ಪುರಾತನವಾದದ್ದು. ಯತಿಗಳ ಸಮಾಧಿಗೆ "ಬೃಂದಾವನ" ಎಂಬ ಹೆಸರಿದೆ. ಶಿಲ್ಪಶಾಸ್ತ್ರದಲ್ಲಿಯೂ 'ಬೃಂದಾವನ'ದ ಬಗ್ಗೆ ಉಲ್ಲೇಖ ಇರುವಂತೆ ತೋರುವುದಿಲ್ಲ. ಕೆಲವು ವಿದ್ವಾಂಸರ ಅಭಿಪ್ರಾಯದಂತೆ, 'ಗರ್ಭಗೃಹ'ದ ಅಧಿಷ್ಠಾನ (ಬೇಸ್) ವನ್ನು ಬೃಂದಾವನಕ್ಕೆ ಹೋಲಿಸಬಹುದು. ಬೃಂದಾವನದ ಮೇಲ್ಭಾಗದಲ್ಲಿ ಅಷ್ಟದಳಗಳ ಆಕಾರವು ಅಷ್ಟ ದಿಕ್ಪಾಲಕರನ್ನು ಸೂಚಿಸುತ್ತದೆಂದೂ, ಮತ್ತು ಈ ಅಷ್ಟ ದಿಕ್ಪಾಲಕರು ಸಮಾಧಿಯಲ್ಲಿರುವ ಯತಿಗಳಿಗೆ ನೀಚಶಕ್ತಿಗಳು ಕೊಡುವ ತೊಂದರೆಗಳನ್ನು ಎದುರಿಸುತ್ತವೆಯೆಂದೂ ಹೇಳಲಾಗಿದೆ. ಇನ್ನೂ ಕೆಲವು ಅಭಿಪ್ರಾಯಗಳು ತಿಳಿಸುವಂತೆ ಭೂತ ಪ್ರೇತಗಳ ಹಾವಳಿಯನ್ನು ತಡೆಗಟ್ಟಲು ದೇವತೆಗಳನ್ನು ಈ ಅಷ್ಟ ದಳಗಳಲ್ಲಿ ಪ್ರತಿಷ್ಠಾಪಿಸಲಾಗಿದೆ.

ತುಳಸಿ-ಬೃಂದಾವನದಲ್ಲಿ ತುಳಸಿಯ ಮುಖವು ಕೆತ್ತಲ್ಪಟ್ಟಿರುತ್ತದೆ. ಆದರೆ ಯಾವ ಯತಿಗಳ 'ಬೃಂದಾವನ'ದಲ್ಲಿಯೂ, ಆ ಸಮಾಧಿಯಲ್ಲಿರುವ ಯತಿಗಳ ಮುಖವನ್ನಾಗಲೀ, ಹೆಸರನ್ನಾಗಲಿ ಕೆತ್ತಿರುವುದಿಲ್ಲ. 'ಬೃಂದಾವನ'ದ ವಿನ್ಯಾಸದಲ್ಲಿ ಈ ಪದ್ಧತಿ ಇದ್ದಿದ್ದರೆ ಬಹುಶಃ ಜಯತೀರ್ಥರ ಬೃಂದಾವನದ ಬಗ್ಗೆ ಭಿನ್ನಾಭಿಪ್ರಾಯಗಳು ಇರುತ್ತಿರಲಿಲ್ಲವೆಂದು ತೋರುತ್ತದೆ. 'ಬೃಂದಾವನ', 'ಗದ್ದುಗೆ', 'ದರ್ಗಾ', ಅಥವಾ ಪಿರಮಿಡ್‌ಗಳಲ್ಲಿರುವ ಅಂಶ ಒಂದೇ ಆಗಿದೆ. ಇವು ಒಬ್ಬ 'ಯತಿ' ಅಥವಾ ಶ್ರೇಷ್ಠ ವ್ಯಕ್ತಿಯನ್ನು ಜೀವಂತವಾಗಿ ಅಥವಾ ಮರಣಾಂತರ ದೇಹವನ್ನು ಸಮಾಧಿ ಮಾಡಿರುವ ಸ್ಥಳ. ಮಾಧ್ವಯತಿಗಳ ಸಮಾಧಿಗೆ 'ಬೃಂದಾವನ'ವೆಂದೂ, ವೀರಶೈವ ಯತಿಗಳ ಸಮಾಧಿಗೆ 'ಗದ್ದುಗೆ' ಎಂದೂ ಹೆಸರಿಸಿದೆ. ಶ್ರೀ ಮಧ್ವಾಚಾರ್ಯರ ಸ್ಥಳ ಉಡುಪಿ ಆಗಿದ್ದುದರಿಂದಲೂ ಕಡೆಗೋಲು ಕೃಷ್ಣ ಆರಾಧ್ಯದೇವತೆ ಆಗಿದ್ದುದರಿಂದಲೂ, ಶ್ರೀ ಕೃಷ್ಣನು ಬಾಲ್ಯದಲ್ಲಿ ಕಳೆದ ಸ್ಥಳದ ನೆನಪಿಗಾಗಿ

ಅಥವಾ ಅಷ್ಟೇ ಪಾವಿತ್ರ್ಯತೆ ಇರಲಿ ಎಂಬ ಕಾರಣಕ್ಕಾಗಿ ಮಾಧ್ವ ಯತಿಗಳ ಸಮಾಧಿಗೆ 'ಬೃಂದಾವನ' ಎಂಬ ಹೆಸರು ಬಂದಿರಬಹುದು. ಯತಿಗಳ ಬೃಂದಾವನದಲ್ಲಿ (ಉದಾಹರಣೆಗೆ ರಾಘವೇಂದ್ರ ಸ್ವಾಮಿಗಳ ಬೃಂದಾವನ ಮಂತ್ರಾಲಯ,) ಸಾಮಾನ್ಯವಾಗಿ ತುಳಸೀ ಗಿಡವನ್ನು ನೆಟ್ಟಿರುವುದಿಲ್ಲ. ಆದರೆ ನಿತ್ಯ ಪೂಜಿಸದೇ ಇರುವ ಕೆಲವು ಬೃಂದಾವನಗಳಲ್ಲಿ ತುಳಸಿ ನೆಟ್ಟಿರುತ್ತಾರೆ.

'ತುಳಸೀ ಬೃಂದಾವನ'ವನ್ನು ಸುಮಂಗಲಿಯರು ಪ್ರತಿನಿತ್ಯ ಪೂಜಿಸುತ್ತಾರೆ. ಆದರೆ ಗೃಹಸ್ಥನು, ತುಳಸೀ ಪೂಜೆಯನ್ನು ಮಾಡುವುದು ಉತ್ಥಾನ ದ್ವಾದಶೀ ದಿನ ಮಾತ್ರ. ಆದರೆ ಇದೇ ಹೆಸರುಳ್ಳ ಮಾಧ್ವ ಯತಿಯ 'ಬೃಂದಾವನ'ವು ಮಠಗಳ ಗರ್ಭ ಗೃಹದಲ್ಲಿದ್ದು ಮಹಿಳೆಯ ನೆರಳೂ ಅಲ್ಲಿ ಬೀಳಬಾರದೆಂಬ ನಂಬಿಕೆಯೂ ಇದೆ. ಈ ಬೃಂದಾವನ ಒಂದು ಸಮಾಧಿಯಾಗಿದ್ದು ಪುರುಷರಿಂದ ಮಾತ್ರ ಪೂಜಿಸಲ್ಪಡುತ್ತದೆ.

ಮೂರ್ತಿ ಪೂಜೆಯು ಪ್ರಾಚೀನ ಪದ್ಧತಿಯಾದರೂ, ಮಾಧ್ವ ಯತಿಗಳ ಅಥವಾ ಯಾವುದೇ ಯತಿಗಳ ಪೂಜೆ ಹೆಚ್ಚು ಪ್ರಚಲಿತವಾಗಿಲ್ಲ, ಆದುದರಿಂದ 'ಬೃಂದಾವನ' ಪೂಜೆ ಎಂದರೆ 'ಯತಿ ಪೂಜೆ'ಯಾಗಬಹುದು. ಬೃಂದಾವನದಲ್ಲಿ ಯತಿಯು ಜೀವಂತವಾಗಿರುವರೆಂಬ ನಂಬಿಕೆಯೂ ಇದೆ. ಶ್ರೀ ರಾಘವೇಂದ್ರ ಸ್ವಾಮಿಗಳವರು ಜೀವಂತ ಬೃಂದಾವನಸ್ಥರಾದರು ಎಂದು ನಾವು ತಿಳಿದಿದ್ದೇವೆ. ಆಗಮ ಶಾಸ್ತ್ರದಲ್ಲಿ ಪಂಚಾಮೃತಾಭಿಷೇಕ, ಅಥವಾ ಇತರ ಅಭಿಷೇಕಗಳ ಮೂಲಕ ಪೂಜಿಸುವ ವಿಧಾನವನ್ನು ದೇವತೆಗಳಿಗೆ ಮಾತ್ರ ಮೀಸಲಾಗಿಟ್ಟಿದ್ದು ಬೃಂದಾವನದಲ್ಲಿ ಸಮಾಧಿಸ್ಥರಾಗಿರುವ ಯತಿಗಳಿಗೆ ಈ ವಿಧಾನ ತಿಳಿಸಿಲ್ಲ. ಆದರೆ ಮಠಗಳಲ್ಲಿ ಬೃಂದಾವನಕ್ಕೆ 'ಪಂಚಾಮೃತ ಅಭಿಷೇಕ', ಕ್ಷೀರಾಭಿಷೇಕ' ಮಾಡುವ ಸಂಪ್ರದಾಯವಿದೆ. ಈ ಬೃಂದಾವನಗಳ ಮೇಲೆ ಶ್ರೀರಾಮನ ಅಥವಾ ವಾಯುದೇವರ ಅಥವಾ ಸಾಲಿಗ್ರಾಮವನ್ನಿಟ್ಟು ಪೂಜಿಸುವುದರಿಂದ, ಪೂಜೆಯನ್ನು ಈ ದೇವತೆಗಳ ಮುಖೇನ ಯತಿಗಳಿಗೆ ಅರ್ಪಿಸುವುದರಿಂದ ನೇರವಾಗಿ ವ್ಯಕ್ತಿಗೆ ಪೂಜೆ ಮಾಡುವುದಿಲ್ಲ. ಆದ್ದರಿಂದ ಯಾವುದೇ ಪೂಜಿಸಲ್ಪಡುತ್ತಿರುವ ಬೃಂದಾವನದ ಶಿರದಲ್ಲಿ ಒಬ್ಬ ದೇವತೆಯ ವಿಗ್ರಹ ಅಥವಾ ಸಾಲಿಗ್ರಾಮ ಇರುತ್ತವೆ. ಹಾಗೂ ಮೇಲ್ಭಾಗದಲ್ಲಿ ದಳಗಳು ದೇವತೆಗಳ ಸನ್ನಿಧಿಯನ್ನು ಸೂಚಿಸುತ್ತವೆ.

ಇತ್ತೀಚೆಗೆ 'ಮೃತ್ತಿಕಾ ಬೃಂದಾವನ'ಗಳು ಹೆಚ್ಚಾಗಿ ಕಂಡು ಬರುತ್ತಿವೆ. ಮೂಲ ಬೃಂದಾವನದಿಂದ 'ಮೃತ್ತಿಕೆ'ಯನ್ನು ತಂದು 'ಬೃಂದಾವನ'ವನ್ನು ನಿರ್ಮಿಸಿ ಪೂಜಿಸುವುದು. ಈ ಬೃಂದಾವನಗಳಲ್ಲಿಯೂ ಯತಿಗಳ ಸಾನ್ನಿಧ್ಯ ಇರುತ್ತದೆ ಎಂದೂ, ಇವುಗಳ ಮೇಲೆಯೂ ಸಾಲಿಗ್ರಾಮ ಅಥವಾ ದೇವತೆಗಳ ವಿಗ್ರಹಗಳನ್ನೂ ಇಟ್ಟು ಪೂಜಿಸುವ ಸಂಪ್ರದಾಯವಿದೆ. ○